ಡಾ|| ರಾಧಾ ಕೃಷ್ಣಮೂರ್ತಿ

# ಸಂಸ್ಕೃತಕಾವ್ಯಗಳಲ್ಲಿ ರಾಜ ಮನೋರಂಜನೆಯಾಗಿ ಬೇಟೆ

ನಾಗರೀಕತೆಯ ಆರಂಭದ ಕಾಲದಿಂದಲೂ 'ಬೇಟೆ'ಯು ಒಂದು ಮೆಚ್ಚಿನ 'ಮನೋರಂಜನೆ'ಯಾಗಿ ಕುತೂಹಲಕರವಾಗಿ ಬಳಕೆಯಲ್ಲಿತ್ತು. ಮಾನವನಿಗೆ ವ್ಯವಸಾಯವು ಜೀವನೋಪಾಯವಾಗುವ ಮೊದಲು, ಬೇಟೆಯೇ ಅವನ ಆಹಾರಾನ್ವೇಷಣೆಯ ಮುಖ್ಯ ಮಾರ್ಗವಾಗಿತ್ತು. ಏಕೆಂದರೆ ಮನುಷ್ಯನು ಅವುಗಳನ್ನು ಹಿಡಿದು ಕೊಲ್ಲುವುದರ ಮುಲಕ, ಅದರ ಮಾಂಸವನ್ನು ತಿಂದು ಜೀವನ ನಡೆಸುತ್ತಿದ್ದನು. ಸಮಾಜವು ಪ್ರಗತಿ ಪಥದಲ್ಲಿ ಮುಂದುವರೆದಂತೆ ಬೇಟೆಯು, ಕೆಲವು ಬುಡಕಟ್ಟಿನ ಜನಾಂಗದವರ ಜೀವನನಿರ್ವಹಣೆಯ ಉದ್ಯೋಗವಾಗಿ ಪರಿಣಮಿಸಿತು. ಆದರೆ ಸಮಾಜದ ಶ್ರೀಮಂತ ಜನರಿಗೂ, ಆಳುವ ರಾಜರಿಗೂ, ಇದು ಆನಂದದಿಂದ ಕಾಲ ಕಳೆಯುವ ಮಾರ್ಗವಾಯಿತು.

ಪ್ರಾಗೈತಿಹಾಸಿಕ ಕಾಲದ ವರ್ಣಚಿತ್ರಗಳು ಪ್ರಾಣಿ. ಬೇಟೆಯ ಹಲವಾರು ದೃಶ್ಯವನ್ನು ಚಿತ್ರಿಸಿದರೆ, ಸಿಂಧೂಕಣಿವೆಯಲ್ಲಿ ದೊರೆತಿರುವ ಮುದ್ರೆಗಳು, ಬೇಟೆಗಿದ್ದ ಧಾರ್ಮಿಕ ಮಹತ್ವವನ್ನು ತಿಳಿಸುತ್ತವೆ. ಋಗ್ವೇದದ ಸೂಕ್ತಗಳಲ್ಲೂ ಬೇಟೆಗೆ ಸಂಬಂಧಿಸಿದ ವಿವರಗಳಿವೆ ಮತ್ತು ಸೂಕ್ತಕಾರರು, ನಿಷಾಧರನ್ನು ಉಲ್ಲೇಖಿಸುತ್ತಿದ್ದು ಈ ನಿಷಾಧರೆಂದರೆ ನುರಿತ ಬೇಟೆಗಾರರಾಗಿದ್ದು, ಬೇಟೆಯೇ ಅವರ ಉದ್ಯೋಗವಾಗಿತ್ತು. ಬೇಟೆಯು ರಾಜರ ವಿನೋದವಾಗಿತ್ತು. ಈ ವಿನೋದವನ್ನು ವಿಶೇಷ ಸಂದರ್ಭಗಳಲ್ಲಿ ಪ್ರದರ್ಶಿಸುತ್ತಿದ್ದರೆಂದು ಮೆಗಾಸ್ತಾನೀಸ್ ಮತ್ತಿತರರು ತಿಳಿಸಿರುತ್ತಾರೆ. 'ರಘುವಂಶ' 'ಕಾದಂಬರೀ' ಮೊದಲಾದ ಹಲವಾರು ಸಂಸ್ಕೃತ ಗ್ರಂಥಗಳಲ್ಲಿ ಬೇಟೆಗೆ ಸಂಬಂಧಿಸಿದ ಅನೇಕ ವಿವರಗಳು ದೊರೆಯುತ್ತವೆ. ಕೆಲವು ಕಾವ್ಯಗಳು ಬೇಟೆಯಾಡುವುದು ಆರೋಗ್ಯಕ್ಕೆ ಹಿತಕರವೆಂದೂ, ಆಡಳಿತ ನಿರ್ವಹಣೆಯ ಮಾಧ್ಯಮವೆಂದು ತಿಳಿಸಿವೆ.ಪ್ರಾಚೀನ ಭಾರತೀಯ ವಿಚಾರವೇತ್ತರಾದ ಕೌಟಿಲ್ಯ, ಮನು ಇವರೆಲ್ಲ ಕ್ರೌರ್ಯ ಮತ್ತು ಹಿಂಸೆಯನ್ನೊಳಗೊಂಡಿರುವ 'ಬೇಟೆಯ ವಿನೋದ'ವನ್ನು ತಿರಸ್ಕರಿಸುತ್ತಾರೆ. ಆದರೆ ಸಂಸ್ಕೃತ ಗ್ರಂಥವಾದ ದಂಡಿಯ ದಶಕುಮಾರ ಚರಿತವು ಬೇಟೆಯಿಂದಾಗು್ವ ಹಲವಾರು ಪ್ರಯೋಜನಗಳನ್ನು ತಿಳಿಸಿರುತ್ತದೆ. ಸಂಸ್ಕೃತ ಗ್ರಂಥಗಳಲ್ಲಿ ಬೇಟೆಯ ಬಗೆಗೆ ದೊರೆಯುವ ವಿವಿಧ ಅಭಿಪ್ರಾಯಗಳನ್ನು ಗಮನಿಸುವುದು ಕುತೂಹಲಕರವಾಗಿದೆ.

ದಟ್ಟವಾದ ಸಂಪದ್ಭರಿತವಾದ ಅರಣ್ಯಗಳಿಂದ ಕೂಡಿದ ಕರ್ನಾಟಕದಲ್ಲಿ ರಾಜಮನೆತನದವರಿಗೆ ಮತ್ತು ಶ್ರೀಮಂತರಿಗೆ ಬೇಟೆಯು ಒಂದು ಸುವ್ಯವಸ್ಥಿತವಾದ ಕ್ರೀಡೆಯಾಗಿ ಬೆಳೆದು ಬಂದಿದೆ. ಕೆಲವು ಶಿಲಾಶಾಸನಗಳು ಇದರ ಬಗೆಗೆ ಬೆಳಕು ಚೆಲ್ಲಿವೆ. ಅನೇಕ ಶಿಲಾಶಾಸನಗಳು ಸಾಹಿತ್ಯದ ಆಕರಗಳೂ, ರಾಜರನೇಕರು ಬೇಟೆಗಾಗಿ ದಿಗ್ವಿಜಯ ಹೊರಟ್ಟಿದ್ದನ್ನು ತಿಳಿಸುತ್ತವೆ. ಬ್ರಿಟಿಷ್ ಮ್ಯೂಸಿಯಂನಲ್ಲಿರುವ ಮೂರನೇ ಗೋವಿಂದನ ತಾಮ್ರಪಟಗಳಿಂದ – ನಿಯುಕ್ತವಾದ ಅರಣ್ಯಗಳಲ್ಲಿ ಸಂರಕ್ಷಿಸಲ್ಪಟ್ಟಿದ್ದ ವನ್ಯಮೃಗಗಳನ್ನು ಬೇಟೆಯಾಡಿ ರಾಜರು, ಶ್ರೀಮಂತರು ಸಂತೋಷಿಸುತ್ತಿದ್ದರೆಂದು ತಿಳಿದುಬರುತ್ತದೆ. ಚಾಳುಕ್ಯರ ದೊರೆಗಳಾದ ಸೋಮೇಶ್ವರ, ಕುಮಾರಪಾಲ ಮೊದಲಾದವರಿಗೆ ಬೇಟೆಯು ಇಷ್ಟವಾಗಿತ್ತು. ವಸ್ತು ಸಂಗ್ರಹಾಲಯಗಳಲ್ಲಿ ಕರ್ನಾಟಕದ ರಾಜರು ಮತ್ತು ಶ್ರೀಮಂತರ ಬೇಟೆಯಾಡುತ್ತಿದ್ದದ ಈ ಚಿತ್ರಗಳನ್ನು, ವಸ್ತುಗಳನ್ನು ಪ್ರದರ್ಶಿಸಲಾಗಿದೆ. ಕರ್ನಾಟಕವು ಆನೆಗಳಿಗೆ ಹೆಚ್ಚು ಪ್ರಸಿದ್ಧವಾಗಿದ್ದು, ದಟ್ಟವಾದ ಅರಣ್ಯಗಳಿರುವಲ್ಲಿ, ಇತ್ತೀಚಿನವರೆಗೆ ಮದ್ದಾನೆಗಳನ್ನು ಹಿಡಿಯಲು 'ಖೆಡ್ಡಾ'ಗಳನ್ನೇರ್ಪಡಿಸುತ್ತಿದ್ದರು.

ಸಂಸ್ಕೃತ ಭಾಷೆಯಲ್ಲಿ 'ಬೇಟೆ' ಪದಕ್ಕೆ ಸಂವಾದಿಯಾಗಿ 'ಮೃಗಯಾ' ಎಂಬ ಪದವನ್ನು ಬಳಸುತ್ತಾರೆ ಮತ್ತು'ಶ್ಯೇನಾಪಾತ' ಎಂಬ ಪದವು ಇದೇ ಅರ್ಥದಲ್ಲಿ ಬಳಸಲಾಗುತ್ತದೆ. ಏಕೆಂದರೆ ಗಿಡುಗಗಳನ್ನು ಆಮಿಷವಾಗಿ ಹಾಕಿ ಬೇಟೆಯಾಡುವ ತರಬೇತಿ ನೀಡುತ್ತಿದ್ದರು. ಸಂಸ್ಕೃತ ಸಾಹಿತ್ಯ ಗ್ರಂಥಗಳಲ್ಲಲ್ಲದೇ, ಶಬ್ದಭಂಡಾರಗಳೆನ್ನಿಸಿರುವ 'ಮಾನಸೋಲ್ಲಾಸ', 'ಸಾಮ್ರಾಜ್ಯ ಲಕ್ಷ್ಮೀ ಪೀಠಿಕಾ', 'ಶ್ಯೇನಶಾಸ್ತ್ರಂ', 'ಗಜಶಾಸ್ತ್ರಂ'......ಮೊದಲಾದ

ವುಗಳಲ್ಲೂ ಬೇಟೆಯಲ್ಲಿ ಬಳಸುವ ವಿವಿಧ ತಂತ್ರಗಳ ಬಗೆಗೂ, ಕಾರ್ಯಗಳ ಬಗೆಗೂ ವಿವರವಾದ ವರ್ಣನೆಗಳನ್ನು ನೀಡುತ್ತಿವೆ. ವಿವಿಧ ಪ್ರಾಣಿಗಳನ್ನು ರೇಗಿಸುವ, ವಶಪಡಿಸಿಕೊಳ್ಳುವ, ಈ ಉದ್ದೇಶಕ್ಕಾಗಿ ಗಿಡುಗಗಳನ್ನು ಬಳಸುವ ತರಬೇತಿಯನ್ನು ನೀಡುವ ಕಲೆಯನ್ನು ಇದಕ್ಕಾಗಿ ಬಳಸುವ ವಿವಿಧ ಆಯುಧಗಳ ಬಗೆಗೆ, ಶಸ್ತ್ರಗಳ ಬಗೆಗೆ ವಿವರಣೆ ನೀಡುತ್ತವೆ. ಈ ಕೃತಿಗಳು ಆಡಳಿತದಲ್ಲಿರುವ ವ್ಯಕ್ತಿಗಳಿಗೆ – ಬೇಟೆಯು ಕೇವಲ ವಿನೋದಕ್ಕಾಗಿರದೇ ಇದು ಅವಶ್ಯಕ ಕಲೆಯಾಗಿದ್ದು ಇದು ಅವರಿಗೆ ಸೈನ್ಯ ಪದ್ಧತಿಯು ಜ್ಞಾನವನ್ನು, ರಾಜಕೀಯ ತಿಳುವಳಿಕೆಯನ್ನು ಹೆಚ್ಚಿಸುತ್ತದೆಂದು ತಿಳಿಸುತ್ತವೆ. ಇಷ್ಟಲ್ಲದೆ, ಬೇಟೆಯು, ಕುಡಿತ, ಜೂಜುಗಳಂತೆ ಒಂದು ಕೆಟ್ಟ ಚಾಳಿಯೆಂದು, ತಿರಸ್ಕರಿಸಲ್ಪ ಡುವುದಾದರೂ, ಇದನ್ನು ಕ್ಷತ್ರಿಯರಿಗೆ ಧರ್ಮ, ಅರ್ಥ, ಕಾಮಗಳನ್ನು ಸಾಧಿಸುವ ಒಂದು ಮನೋರಂಜಕ ಮಾರ್ಗವೆಂದು ಪುರಸ್ಕರಿಸಲಾಗಿದೆ.

ಇಂದು ಅರಣ್ಯಜೀವಿಗಳ ಸಂರಕ್ಷಣಾರ್ಥವಾಗಿ 'ಬೇಟೆ'ಯನ್ನು ನಿಷೇಧಿಸಲಾಗಿದೆಯಾದರೂ, ಇದು ಕಲೆಗಾರರಿಗೆ, ಕವಿಗಳಿಗೆ, ನಾಟಕಕಾರರಿಗೆ ಮತ್ತು ಇತಿಹಾಸಜ್ಞರಿಗೆ ಒಂದು ಆಸಕ್ತಿದಾಯಕ ವಿಷಯವೇ ಆಗಿದೆ. ಆದುದರಿಂದ ಮೇಲಿನ ಅಂಶಗಳನ್ನು ವಿವರಿಸುತ್ತಾ – " ಸಂಸ್ಕೃತಗ್ರಂಥಗಳನ್ನಾಧರಿಸಿ ಶ್ರೀಮಂತರ ವಿನೋದ ಪ್ರಕಾರವಾದ ಬೇಟೆಯ ಮಹತ್ವವನ್ನು ಅದರ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಆಟದಿಂದಾಗುವ ಆನಂದದ ಮೌಲ್ಯಗಳನ್ನು ವಿವರಿಸುವ ಪ್ರಯತ್ನದ ಆಶಯವಾಗಿ ಈ ಲೇಖನ ಒಡಮೂಡಿದೆ.

ಅನು : ಕೊ. ವಸಂತಲಕ್ಷ್ಮಿ